# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1355
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು
ಉತ್ತರಿಸಬೇಕಾದ ದಿನಾಂಕ : 16.03.2021

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಭಾರತೀಯ ಬಂಡವಾಳ ಸರಕು ಕ್ಷೇತ್ರದ ಸ್ಪರ್ಧಾತ್ಮಕತೆ ಹೆಚ್ಚಿಸಲು ತುಮಕೂರಿನ ಅಮರಪುರದಲ್ಲಿ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಉದ್ಯಮಗಳ (ಎಂಎಸ್ಎಂಇ) ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ಸರ್ಕಾರ ಕ್ರಮಗಳನ್ನು ಪ್ರಾರಂಭಿಸಿದೆಯೇ; (ವಿವರಗಳನ್ನು ನೀಡುವುದು) | ಭಾರತೀಯ ಬಂಡವಾಳ ಸರಕು ಕ್ಷೇತ್ರದ ಸ್ಪರ್ಧಾತ್ಮಕತೆ ಹೆಚ್ಚಿಸಲು ತುಮಕೂರಿನ ಅಮರಪುರದಲ್ಲಿ ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಉದ್ಯಮಗಳ (ಎಂ.ಎಸ್.ಎಂ.ಇ) ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ಸರ್ಕಾರ ಕ್ರಮಗಳನ್ನು ಕೈಗೊಂಡಿದ್ದು, ಅದರಂತೆ ಮಾನ್ಯ ಜಿಲ್ಲಾಧಿಕಾರಿಗಳು ದಿನಾಂಕ 24.10.2017 ರಂದು ಸರ್ವೆ ಸಂಖ್ಯೆ: 31, ಅಮರಾಪುರ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ 15 ಎಕರೆ ವಿಸ್ತೀರ್ಣದ ಜಮೀನನ್ನು ಎಂ.ಎಸ್.ಎಂ.ಇ ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ಮಂಜೂರು ಮಾಡಿರುತ್ತಾರೆ.<br><br>ಈ ಜಮೀನನ್ನು ದಿನಾಂಕ 04.12.2017 ರಂದು ತಹಶೀಲ್ದಾರರು, ತುಮಕೂರು ತಾಲ್ಲೂಕು ಇವರು ಅಭಿವೃದ್ಧಿ ಆಯುಕ್ತರು, ಎಂ.ಎಸ್.ಎಂ.ಇ, ಭಾರತ ಸರ್ಕಾರ, ನವದೆಹಲಿ ಇವರಿಗೆ ಹಸ್ತಾಂತರಿಸಿರುತ್ತಾರೆ. |
| ಆ) | 2017 ರಲ್ಲಿ ಅಮರಪುರದಲ್ಲಿ ಎಂಎಸ್ಎಂಇ ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ರಾಜ್ಯ ಸರ್ಕಾರವು ಈಗಾಗಲೇ 15 ಎಕರೆ ಭೂಮಿಯನ್ನು ಉಚಿತವಾಗಿ ಸ್ವಾಧೀನಪಡಿಸಿಕೊಂಡಿದೆಯೇ; ಹಾಗೂ ವರ್ಗಾಯಿಸಿದೆಯೇ; (ವಿವರಗಳನ್ನು ನೀಡುವುದು) | ಮಾನ್ಯ ಜಿಲ್ಲಾಧಿಕಾರಿಗಳು, ತುಮಕೂರು ಇವರು ದಿನಾಂಕ 24.10.2017 ರಂದು ಸರ್ವೆ ಸಂಖ್ಯೆ: 31, ಅಮರಾಪುರ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ ಇಲ್ಲಿ 15 ಎಕರೆ ವಿಸ್ತೀರ್ಣದ ಜಮೀನನ್ನು ಎಂ.ಎಸ್.ಎಂ.ಇ ತಂತ್ರಜ್ಞಾನ ಕೇಂದ್ರವನ್ನು ಸ್ಥಾಪಿಸಲು ಮಂಜೂರು ಮಾಡಿರುತ್ತಾರೆ.<br><br>ಈ ಜಮೀನನ್ನು ದಿನಾಂಕ 04.12.2017 ರಂದು ತಹಶೀಲ್ದಾರರು, ತುಮಕೂರು ತಾಲ್ಲೂಕು ಇವರು ಅಭಿವೃದ್ಧಿ ಆಯುಕ್ತರು, ಎಂ.ಎಸ್.ಎಂ.ಇ, ಭಾರತ ಸರ್ಕಾರ, ನವದೆಹಲಿ ಇವರಿಗೆ ಹಸ್ತಾಂತರಿಸಿರುತ್ತಾರೆ. |
| ಇ) | ಕಾಮಗಾರಿ ಪೂರ್ಣಗೊಂಡ ಪ್ರಸ್ತುತ ಸ್ಥಿತಿ ಮತ್ತು ಕೇಂದ್ರವನ್ನು ಸ್ಥಾಪಿಸಲು ದಿನಾಂಕವನ್ನು ನಿಗದಿಪಡಿಸಲಾಗಿದೆಯೇ; (ವಿವರಗಳನ್ನು ನೀಡುವುದು) | ಕಾಮಗಾರಿ ಇನ್ನೂ ಮಂಜೂರಾಗಿರುವುದಿಲ್ಲ. |
| ಈ) | ಮುಂದಿನ ಮೂರು ವರ್ಷಗಳಲ್ಲಿ ನಿಗದಿಪಡಿಸಿದ ಬೆಳವಣಿಗೆಯ ಗುರಿಗಳನ್ನು ಸಾಧಿಸಲು ಸರ್ಕಾರ ಕೈಗೊಂಡ/ಕೈಗೊಳ್ಳಬೇಕಾದ ಕ್ರಮಗಳೇನು? | ನಿರ್ದೇಶಕರು, ಸೂಕ್ಷ್ಮ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳ ಅಭಿವೃದ್ಧಿ ಸಂಸ್ಥೆ, ಬೆಂಗಳೂರು ಇವರು ದಿನಾಂಕ 17.01.2018 ರಂದು ಅಪರ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು (ಎಂ.ಎಸ್.ಎಂ.ಇ), ನವದೆಹಲಿ ಇವರಿಗೆ ಎಂ.ಎಸ್.ಎಂ.ಇ ತಂತ್ರಜ್ಞಾನ ಸಂಸ್ಥೆಯನ್ನು ಸ್ಥಾಪಿಸಲು ವಾಸ್ತುಶಿಲ್ಪಿಯ ಸಮಾಲೋಚಕರ ಶುಲ್ಕ ಮತ್ತು ಅಂದಾಜು ತಯಾರಿಸಲು ರೂ.52.89 ಲಕ್ಷಗಳನ್ನು ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. |

ಅಭಿವೃದ್ಧಿ ಆಯುಕ್ತರು (ಎಂ.ಎಸ್.ಎಂ.ಇ), ನವದೆಹಲಿ ಇವರು ಯಾವುದೇ ಅನುದಾನ ಮಂಜೂರು ಮಾಡದ ಕಾರಣ ದಿನಾಂಕ 19.12.2019 ರಂದು ಮತ್ತೊಮ್ಮೆ ಎಂ.ಎಸ್.ಎಂ.ಇ ತಂತ್ರಜ್ಞಾನ ಸಂಸ್ಥೆಯನ್ನು ಸ್ಥಾಪಿಸಲು ವಾಸ್ತುಶಿಲ್ಪಿಯ ಸಮಾಲೋಚಕರ ಶುಲ್ಕ ಮತ್ತು ಅಂದಾಜು ತಯಾರಿಸಿಲು ರೂ.52.89 ಲಕ್ಷಗಳನ್ನು ಮಂಜೂರು ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ

ಕೇಂದ್ರ ಸರ್ಕಾರವು ಇದುವರೆಗೂ ಎಂ.ಎಸ್.ಎಂ.ಇ ತಂತ್ರಜ್ಞಾನ ಸಂಸ್ಥೆಯನ್ನು ಸ್ಥಾಪಿಸಲು ವಾಸ್ತುಶಿಲ್ಪಿಯ ಸಮಾಲೋಚಕರ ಶುಲ್ಕ ಮತ್ತು ಅಂದಾಜು ತಯಾರಿಸಿಲು ರೂ.52.89 ಲಕ್ಷಗಳನ್ನು ಮಂಜೂರು ಮಾಡದೇ ಇದ್ದರಿಂದ ದಿನಾಂಕ 03.02.2020 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರ ಇವರಿಗೆ ಕೇಂದ್ರದ ಚಟುವಟಿಕೆಗಳನ್ನು ತಕ್ಷಣ ಕಾರ್ಯಾರಂಭ ಮಾಡಲು 30,000 ಚದರ ಅಡಿ ವಿಸ್ತೀರ್ಣದ ಕಟ್ಟಡವನ್ನು ತುಮಕೂರು ಅಥವಾ ಹತ್ತಿರದಲ್ಲಿ ನೀಡಲು ಕೋರಿರುತ್ತಾರೆ.

ಮುಂದುವರೆದು, ಯೋಜನೆಯ ಹೊಸ ಮಾರ್ಗಸೂಚಿಯ ಪ್ರಕಾರ ಕಟ್ಟಡವನ್ನು ರಾಜ್ಯ ಸರ್ಕಾರವು ಒದಗಿಸಬೇಕಾಗಿರುತ್ತದೆ ಎಂದು ತಿಳಿಸಿರುತ್ತಾರೆ.

ಶ್ರೀ ನಿತಿನ್ ಗಡ್ಕರಿ, ಮಾನ್ಯ ರಸ್ತೆ, ಸಂಚಾರ ಮತ್ತು ರಾಷ್ಟ್ರೀಯ ಹೆದ್ದಾರಿ ಹಾಗೂ ಎಂ.ಎಸ್.ಎಂ.ಇ ಸಚಿವರು, ಭಾರತ ಸರ್ಕಾರ ಇವರು ಶ್ರೀ ಜಿ.ಎಸ್.ಬಸವರಾಜ, ಮಾನ್ಯ ಲೋಕಸಭಾ ಸದಸ್ಯರು, ಇವರಿಗೆ ತಮ್ಮ ಪತ್ರ ದಿನಾಂಕ 24.12.2020 ರಲ್ಲಿ ತುಮಕೂರಿನಲ್ಲಿ ತಕ್ಷಣ ತಂತ್ರಜ್ಞಾನ ಕೇಂದ್ರದ ಕಾರ್ಯಾಚರಣೆ ಪ್ರಾರಂಭಿಸಲು 30,000 ಚದುರ ಅಡಿ ವಿಸ್ತೀರ್ಣದ ಕಟ್ಟಡವನ್ನು ಒದಗಿಸಲು ಮತ್ತು ಈಗಾಗಲೇ ಹಂಚಿಕೆಯಾಗಿರುವ 15 ಎಕರೆ ಜಮೀನನ್ನು ಹಿಂದಕ್ಕೆ ನೀಡಲು ಕೇಂದ್ರ ಸರ್ಕಾರದ ಅಧಿಕಾರಿಗಳಿಗೆ ತಿಳಿಸಿರುವುದಾಗಿ ತಿಳಿಸಿರುತ್ತಾರೆ.

ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು ಇವರು ತಮ್ಮ ಪತ್ರ ದಿನಾಂಕ 19.01.2021 ರಲ್ಲಿ ನಿರ್ದೇಶಕರು (ಎಂ.ಎಸ್.ಎಂ.ಇ) ಇವರಿಗೆ ತಂತ್ರಜ್ಞಾನ ಸಂಸ್ಥೆಯ ಕಟ್ಟಡವನ್ನು ನಿರ್ಮಿಸಲು ರೂ.7.50 ಕೋಟಿ ಅನುದಾನವನ್ನು ಮಂಜೂರು ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯವು ಪರಿಶೀಲಿಸುತ್ತಿದೆ.

ಸಿಐ 45 ಎಸ್‌ಎಸ್‌ಐ 2021

*(ಸಿ.ಸಿ. ಪಾಟೀಲ್)*

ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು
ಸಾರ್ವಜನಿಕ ಸಂಪರ್ಕ ಸಚಿವರು